


# ಜ್ಯೋತಿಷ ಮಿತ್ರ

## ಆನ್‌ಲೈನ್ ದಿನಪತ್ರಿಕೆ

www.jyothishamithra.com

**ಸಂಚಿಕೆ : 1249   02-02-2022   ಬುಧವಾರ**

ಪ್ಲವನಾಮ ಸಂವತ್ಸರ ಉತ್ತರಾಯಣ ಶಿಶಿರಋತು ಮಾಘಮಾಸ ಶುಕ್ಲಪಕ್ಷ

| ನಿತ್ಯ ಪಂಚಾಂಗ | ಸುಜ್ಞಾನ |
|---|---|
| ತಿಥಿ : ಪಾಡ್ಯ (08:30)<br>ನಕ್ಷತ್ರ : ಧನಿಷ್ಠಾ (17:52)<br>ರಾಹುಕಾಲ :<br>12:43 PM - 02:10 PM<br>ಗುಳಿಕಕಾಲ :<br>11:16 AM - 12:43 PM | ಮನುಷ್ಯನ ನಿಜವಾದ ಬದಲಾವಣೆ ಯಾಗುವುದು, ಅವನಿಗೆ ಅವಮಾನ, ಅಪಮಾನ ಅಲ್ಲದೇ ಅವನ ಮನಸ್ಸಿಗೆ ಬಲವಾದ ಪೆಟ್ಟು ಬಿದ್ದಾಗ ಮಾತ್ರ. |



# ಪುನರ್ಜನ್ಮ ವಿಚಾರ

ಕದಾಚಿತ್ ಭತೇಜನ್ಮಾ ಮಾನುಷಂ ಪುಣ್ಯಸಂಶ್ರಯಾತ್
ನರತ್ವಂ ದುರ್ಲಭಂಲೋಕೇ  ಜಂತೂನಾಂ ನರಜನ್ಮದುರ್ಲಬಂ ||

- ಶಂಕರಾಚಾರ್ಯರು

ಮೂವತ್ತಮೂರುಕೋಟಿ ಜನ್ಮಗಳ ನಂತರ ಮತ್ತೇ ಈ ಮಾನವ ಜನ್ಮ ಸಿಗುತ್ತದೆ.  ಅನೇಕ ಕ್ರಿಮಿಕೀಟಕ ಪಶು ಪಕ್ಷಿ ಮೃಗ ಜಲಚರ ಜನ್ಮಗಳ ನಂತರವೇ ಮತ್ತೇ

ಮನುಷ್ಯನಾಗಿ ಹುಟ್ಟುವ ಸದವಕಾಶ ಬರುತ್ತದೆ ಎಂದು ಪುರಾಣ, ಶ್ರುತಿ ಶಾಸ್ತ್ರಗಳು ಹೇಳುತ್ತಿವೆ.

ಈಗಿನ ಹೆಂಡತಿ ಗತಜನ್ಮಗಳಲ್ಲಿ ಯಾರಿಗೇ ಹೆಂಡತಿಯಾಗಿ ಬದುಕಿ ಬಂದವಳು...! ಈಗಿನ ಮಕ್ಕಳು ಪೂರ್ವಜನ್ಮಗಳಲ್ಲಿ ಯಾರಿಗೋ ಮಕ್ಕಳಾಗಿದ್ದು ಬಂದವರು...! ಈ ದೈಹಿಕವಾದ ಬಂಧನಗಳು ಶಾಶ್ವತವಲ್ಲ. ಇದನ್ನು ತಿಳಿದು ಅತಿ ಮೋಹಕ್ಕೆ ಒಳಗಾಗದೇ ಬದುಕಿನ ಬಂಡಿಯನ್ನು ನಡೆಯಿಸಬೇಕೆಂದೂ, ವ್ಯಾಮೋಹಗಳಿಗೆ ಒಳಗಾಗ ಬಾರದೆಂದೂ, ಸಾಧು ಸಂತರು ಹೇಳಿದ್ದಾರೆ.

ನಮಗೆ ಎಲ್ಲಾ ಗೊತ್ತಿದೆ. ಎಲ್ಲಾ ತಿಳುವಳಿಕೆ ಇದೆ. ಈ ಬದುಕು ಕೆಲವೇ ದಿನಗಳ ಜಾತ್ರೆ ಎಂದು ಗೊತ್ತಿದೆ. ಆದರೂ ನಮ್ಮ ಬುದ್ಧಿಯನ್ನು ನಾವು ಬದಲಾಯಿಸಲು ಆಗುವುದಿಲ್ಲ, ನಮ್ಮ ಬದಲಾವಣೆ ಕ್ಷಣಿಕ ಮಾತ್ರ.

ಹೆಂಡತಿಯ ಬಗ್ಗೆ ಯೋಚಿಸುವುದರಲ್ಲಿ ಒಂದು ರೀತಿ ನ್ಯಾಯವಿದೆ. ಮಕ್ಕಳ ಬಗ್ಗೆ, ಮೊಮ್ಮಕ್ಕಳ ಬಗ್ಗೆ, ಮರಿ ಮೊಮ್ಮಕ್ಕಳ ಬಗ್ಗೆ ಯೋಚಿಸಿ ಅಕ್ರಮಗಳಿಕೆಯನ್ನು ಮಾಡುವುದರಲ್ಲಿ ಯಾವ ರೀತಿಯ ಪರಮಾರ್ಥವಿಲ್ಲ.

ನಮ್ಮ ಶ್ರಮಕ್ಕೆ, ನಮ್ಮ ನೈಪುಣ್ಯತೆಗೆ, ನಮ್ಮ ಬುದ್ಧಿಶಕ್ತಿಗೆ ತಕ್ಕ ಫಲಿತವನ್ನು ನಾವು ಪಡೆಯುವುದರಲ್ಲಿ ಅನ್ಯಾಯವಿಲ್ಲ. ಮೋಸದಿಂದ ವಂಚನೆಯಿಂದ, ದುರಾಚಾರಗಳಿಂದ ಹಣವನ್ನು ಕೂಡಿಡಬೇಕೆಂಬ ಯೋಚನೆ ಮಹಾಪರಾಧ.




**ಜನನ ದಿನಾಂಕ : 15-09-1967 ಸಮಯ : 5.02 PM**

ಚತುರ್ಥ ಮತ್ತು ಚಂದ್ರರು ದೋಷಪೂರ್ಣರಾದರೆ ಬಾಲ್ಯದಲ್ಲಿ ತಾಯಿಯನ್ನು ಕಳೆದುಕೊಳ್ಳಬೇಕಾಗಬಹುದು. ಬೃಹಜ್ಜಾತಕದ ನಿಷೇಕಾಧ್ಯಾಯದ ಹಾಗೂ ಅನಿಷ್ಟಾಧ್ಯಾಯದ ಶ್ಲೋಕಗಳನ್ನು ಗಮನಿಸಿದಾಗ ಚಂದ್ರನ ಷಷ್ಠಾಷ್ಟಮವ್ಯಯದ ಸ್ಥಿತಿ. ಆತನಿಗುಂಟಾಗುವ ಪಾಪಕರ್ತರೀಯೋಗ, ಲಗ್ನ ಹಾಗೂ ಚಂದ್ರರಿಂದ ಚತುರಸ್ರ (ಚತುರ್ಥ ಮತ್ತು ಅಷ್ಟಮ)ದ ಪಾಪಗ್ರಹರ ಸ್ಥಿತಿ,

ಚಂದ್ರನ ದೌರ್ಬಲ್ಯ ಬಾಲ್ಯದ ಮಾತೃವಿಯೋಗಕ್ಕೆ ಕಾರಣವಾಗುತ್ತದೆ.

| | | | |
|---|---|---|---|
| ಶನಿ | ರಾಹು | | |
| ಲಗ್ನ | | | ಶುಕ್ರ |
| ಚಂದ್ರ | ರಾಶಿ | | ರವಿ<br>ಗುರು |
| | ಕುಜ | ಕೇತು | ಬುಧ |

ಮೇಲಿನ ಕುಂಡಲಿಯಲ್ಲಿ ಮಾತೃಕಾರಕ ಚಂದ್ರನು ಷಷ್ಠಾಧಿಪತಿಯಾಗಿ ವ್ಯಯದಲ್ಲಿ ಶನಿಕ್ಷೇತ್ರದಲ್ಲಿರುವನು. ಮಾತೃಸ್ಥಾನವಾದ ಚತುರ್ಥಕ್ಕೆ ಕುಜ-ಶನಿಗಳ ದೃಷ್ಟಿ ಇದೆ. ಚತುರ್ಥಾಧಿಪತಿ ಶುಕ್ರನು ಷಷ್ಠದಲ್ಲಿ ಭೃಗುಷಷ್ಠದೋಷ ಉಂಟಾಗಿದೆ. ಮಾತೃಕಾರಕ

ಚಂದ್ರನಿಗೆ ಚತುರ್ಥದಲ್ಲಿ ರಾಹು ಇರುವನು.

| | | | |
|---|---|---|---|
| ಶುಕ್ರ | ಗುರು | | ಚಂದ್ರ<br>ಬುಧ ರಾಹು |
| ಲಗ್ನ | | | |
| | ನವಾಂಶ | | |
| ರವಿ<br>ಕೇತು | ಶನಿ | ಕುಜ | |

ನವಾಂಶ ಕುಂಡಲಿಯಲ್ಲಿ ಮಾತೃಕಾರಕ ಚಂದ್ರನಿಗೆ ರಾಹುಯೋಗ ರವಿದೃಷ್ಟಿ ಉಂಟಾಗಿದೆ. ಚತುರ್ಥಕ್ಕೆ ಶನ್ಯಂಗಾರಕ ದೃಷ್ಟಿ ಇದೆ. ಚತುರ್ಥಾಧಿಪತಿ ಶುಕ್ರನು ಉಚ್ಚನಾಗಿದ್ದು ಬಲಿಷ್ಠನಾಗಿರುವುದು ಶುಭವೇ. ಆದರೆ ಮಾತೃಕಾರಕ ಚಂದ್ರನು ಅಷ್ಟಮಾಧಿಪತಿಯ ನವಾಂಶದಲ್ಲಿರುವುದು ಅಶುಭ.

ಹೀಗಾಗಿ ಜಾತಕನ ತಾಯಿಯು ರಾಹುದಶಾ ಕೇತುಭುಕ್ತಿಯ ಕಾಲದಲ್ಲಿ ಮರಣವನ್ನು ಹೊಂದಿದಳು. ರಾಶಿ ಕುಂಡಲಿಯಲ್ಲಿ ಚಂದ್ರನಿಂದ ಮಾತೃಸ್ಥಾನದ ರಾಹುಸ್ಥಿತಿ ನವಾಂಶಕುಂಡಲಿಯಲ್ಲಿ ಚಂದ್ರನಿಗಿರುವ ರಾಹುಯುತಿಯನ್ನು ಗಮನಿಸಬಹುದು.



ಜ್ಯೋತಿಷ ಮಿತ್ರ ಆನ್ಲೈನ್ ದಿನಪತ್ರಿಕೆ

ಗೌರವ ಸಂಪಾದಕರು : ಜೀವನ್ ಉಳ್ಳಾಲ್

ಸಂಪಾದಕರು : ಶ್ರೀಷ ಎಸ್.

ಕಚೇರಿ ವಿಳಾಸ : ಹತ್ವಾರ್ ಕಾಂಪ್ಲೆಕ್ಸ್, ಹೊಸಬೆಟ್ಟು, ಮಂಗಳೂರು - 575019.

PH : 9986671473 / 9535283535

jmonline@gmail.com www.jyothishamithra.com